# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ರಹಿತ ಪ್ರಶ್ನೆ : 217
2. ಸದಸ್ಯರ ಹೆಸರು : ಶ್ರೀ ಕಾಂತರಾಜ್ (ಬಿಎಂಎಲ್) (ಸ್ಥಳೀಯ ಸಂಸ್ಥೆಗಳ ಕ್ಷೇತ್ರ )
3. ಉತ್ತರಿಸಬೇಕಾದ ದಿನಾಂಕ : 14.12.2021
4. ಉತ್ತರಿಸುವ ಸಚಿವರ : ವಸತಿ ಹಾಗೂ ಮೂಲಸೌಲಭ್ಯ ಅಭಿವೃದ್ಧಿ ಸಚಿವರು

| ಕ್ರ ಸಂ | ಉಪ ಪ್ರಶ್ನೆ | ಉತ್ತರ |
|---|---|---|
| (ಅ) | ಕೆ.ಎಸ್.ಐ.ಐ.ಡಿ.ಸಿ ನಿಗಮವನ್ನು ಯಾವಾಗ ಸ್ಥಾಪನೆ ಮಾಡಲಾಯಿತು; ಇದರ ದ್ದೇಯೋದ್ದೇಶಗಳೇನು; (ವಿವರವಾದ ಮಾಹಿತಿ ನೀಡುವುದು) | ಈ ನಿಗಮವು ಮೈಸೂರು ರಾಜ್ಯ ಕೈಗಾರಿಕಾ ಬಂಡವಾಳ ಮತ್ತು ಅಭಿವೃದ್ಧಿ ನಿಗಮ ನಿಯಮಿತ' ಎಂಬ ಹೆಸರಿನಲಿ ದಿನಾಂಕ 15/6/1964ರಂದು ನೋಂದಾಣಿಯಾಗಿರುತ್ತದೆ. ನಿಗಮದ ಹೆಸರನ್ನು 'ಕರ್ನಾಟಕ ರಾಜ್ಯ ಕೈಗಾರಿಕಾ ಬಂಡವಾಳ ಮತ್ತು ಅಭಿವೃದ್ಧಿ ನಿಗಮ ನಿಯಮಿತ ' ಎಂಬ ಹೆಸರಿಗೆ ದಿನಾಂಕ 2/3/1974ರಂದು ಬದಲಾಯಿಸಲಾಗಿದೆ.<br><br>ಸದರಿ ನಿಗಮದ ಹೆಸರನ್ನು 'ಕರ್ನಾಟಕ ರಾಜ್ಯ ಕೈಗಾರಿಕಾ ,ಮತ್ತು ಮೂಲಸೌಲಭ್ಯ ಅಭಿವೃದ್ಧಿ ನಿಗಮ ನಿಯಮಿತ ' ಎಂದು ದಿನಾಂಕ 22/11/2010ರಂದು ಮರುನಾಮಕರಣ ಮಾಡಿ ನೋಂದಾಯಿಸಲಾಗಿದೆ.<br><br>ಸದರಿ ನಿಗಮದ ನೋಂದಾಯಿತ ಸಂಸ್ಥಾಪನಾ ಪತ್ರದಲ್ಲಿ ( Memorandu of Association) ಹೇಳಿರುವ ದ್ಯೇಯೋದ್ದೇಶಗಳನ್ನು ಅನುಬಂಧ-1 ರಲ್ಲಿ ನೀಡಿದೆ |
| ಆ) | ಸದರಿ ನಿಗಮಕ್ಕೆ ಕಳೆದ 10 ವರ್ಷಗಳಿಂದ ರಾಜ್ಯ ಸರ್ಕಾರ ಮತ್ತು ಕೇಂದ್ರ ಸರ್ಕಾರ ಹಾಗೂ ಇತರೆಗಳಿಂದ ಬಂದ ಹಣವೆಷ್ಟು; ಇದನ್ನು ಯಾವ ಯಾವ ಕಾರ್ಯಕ್ರಮಗಳಿಗೆ ಖರ್ಚು ಮಾಡಲಾಗಿದೆ; (ವರ್ಷವಾರು, ಕಾರ್ಯಕ್ರಮವಾರು ವಿವರವಾದ ಮಾಹಿತಿ ನೀಡುವುದು) | ವಿವರಗಳನ್ನು **ಅನುಬಂಧ -2**ರಲ್ಲಿ ನೀಡಲಾಗಿದೆ. |
| (ಇ) | ಸದರಿ ನಿಗಮದಲ್ಲಿರುವ ಆಸ್ತಿಗಳಾವುವು; ಇವುಗಳ ಇವತ್ತಿನ ಮೌಲ್ಯವೇನು; (ವಿವರವಾದ ಮಾಹಿತಿ ನೀಡುವುದು) | ವಿವರಗಳನ್ನು **ಅನುಬಂಧ-3** ರಲ್ಲಿ ನೀಡಲಾಗಿದೆ. |

| ಕ್ರ ಸಂ | ಉಪ ಪ್ರಶ್ನೆ | ಉತ್ತರ |
|---|---|---|
| (ಈ) | ಸದರಿ ನಿಗಮವು ಕಳೆದ 10 ವರ್ಷಗಳಿಂದ ಯಾವ ಯಾವ ಕಾರ್ಯಕ್ರಮಗಳನ್ನು ಕೈಗೊಂಡಿದೆ; ಇದರಿಂದ ಕೈಗಾರಿಕಾ ಅಭಿವೃದ್ಧಿಗೆ ಆಗಿರುವ ಅನುಕೂಲಗಳೇನು; | ನಿಗಮವು 1964 ರಲ್ಲಿ ಸ್ಥಾಪಿಸಲ್ಪಟ್ಟು ಪ್ರಮುಖವಾಗಿ ಬೃಹತ್ ಮತ್ತು ಮಧ್ಯಮ ಕೈಗಾರಿಕೆಗಳ ಸ್ಥಾಪನೆ ಹಾಗೂ ಅಭಿವೃದ್ಧಿಯಲ್ಲಿ ಮಹತ್ತರ ಪಾತ್ರವಹಿಸಿರುತ್ತದೆ. ಅಕ್ಟೋಬರ್ 2002ರಿಂದ ಸಾಲ ನೀಡುವ ಚಟುವಟಿಕೆಗಳನ್ನು ಸ್ಥಗಿತಗೊಳಿಸಿರುವುದರಿಂದ, ಪ್ರಸ್ತುತ ಕೈಗಾರಿಕಾ ಘಟಕಗಳಿಂದ ಬಾಕಿ ಉಳಿದಿರುವ ಸಾಲದ ವಸೂಲಾತಿಯ ಕಡೆ ಗಮನ ಹರಿಸುತ್ತಿದೆ. ಜೊತೆಗೆ ಕರ್ನಾಟಕ ರಾಜ್ಯದಲ್ಲಿನ ಮೂಲಸೌಲಭ್ಯ ಅಭಿವೃದ್ಧಿಯಲ್ಲಿ ಆನೇಕ ಯೋಜನೆಗಳನ್ನು ಹಮ್ಮಿಕೊಂಡಿದೆ. ವಿಶೇಷವಾಗಿ [illegible] ನಿರ್ಮಾಣ ಮುಂತಾದವು. ಇವುಗಳೊಂದಿಗೆ ಸಾರ್ವಜನಿಕ ಖಾಸಗಿ ಸಹಭಾಗಿತ್ವದ (PPP) ಮಾದರಿಯಲ್ಲಿ ಮೂಲಸೌಲಭ್ಯ ಯೋಜನೆಗಳನ್ನು ಕಾರ್ಯಗತ ಮಾಡುವಲ್ಲಿ ನೋಡಲ್ ಏಜೆನ್ಸಿಯಾಗಿ ಕಾರ್ಯ ನಿರ್ವಹಿಸುತ್ತಿದೆ.<br><br>ಮೂಲಭೂತ ಸೌಲಭ್ಯ ಅಭಿವೃದ್ಧಿಯು ಕೈಗಾರಿಕಾ ಅಭಿವೃದ್ಧಿಯ ಮೇಲೆ ನೇರ ಪರಿಣಾಮ ಬೀರುವುದರಿಂದ ನಿಗಮವು ಹಮ್ಮಿಕೊಂಡಿರುವ ಎಲ್ಲಾ ಯೋಜನೆಗಳು ಕೈಗಾರಿಕಾ ಅಭಿವೃದ್ಧಿಗೆ ಕಾರಣವಾಗಿವೆ. ಅದರಲ್ಲೂ ಸಾರ್ವಜನಿಕ – ಖಾಸಗಿ ಸಹಭಾಗಿತ್ವದಲ್ಲಿ ನಿರ್ಮಾಣಗೊಂಡ ಬೆಂಗಳೂರಿನ ಅಂತರಾಷ್ಟ್ರೀಯ ವಿಮಾನ ನಿಲ್ದಾಣದಿಂದ ರಾಜ್ಯದ ಕೈಗಾರಿಕಾ ವಲಯ ಹೆಚ್ಚು ಪ್ರಗತಿ ಪಥದಲ್ಲಿದೆ. |
| (ಉ) | ಸದರಿ ನಿಗಮದಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಸಿಬ್ಬಂದಿಗಳೆಷ್ಟು; ವಿವರವಾಗಿ ಸಿಬ್ಬಂದಿಗಳ ಹೆಸರು, ವಿಳಾಸ, ಹುದ್ದೆಯ ಪದನಾಮ, ವೇತನ ಶ್ರೇಣಿ, ಮಾಸಿಕ ಪಡೆಯುತ್ತಿರುವ ವೇತನದೊಂದಿಗೆ ವಿವರವಾದ ಮಾಹಿತಿ ನೀಡುವುದು) | ವಿವರಗಳನ್ನು ಅನುಬಂಧ–4 ರಲ್ಲಿ ನೀಡಲಾಗಿದೆ. |

ಸಂಖ್ಯೆ:ಮೂಅಇ 165 ರಾಅವಿ 2021

(ವಿ. ಸೋಮಣ್ಣ)
ವಸತಿ ಹಾಗೂ ಮೂಲಸೌಲಭ್ಯ ಅಭಿವೃದ್ಧಿ, ಸಚಿವರು